# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 144

8ನೇ ವರ್ಷ 36ನೇ ಸಂಚಿಕೆ ಕೊಪ್ಪ 6-5-1990 ಬುಧವಾರ ಬೆಲೆ 30 ಪೈಸೆ


## ಕೊಪ್ಪ: ವಿವೇಕ್-ಸಾದಿಕ್ ಮಧ್ಯೆ ಪೈಪೋಟಿ

ಕೊಪ್ಪ : ಇಲ್ಲಿನ ಮಂಡಲ ಪಂಚಾಯ್ತಿ (ಪರಿವರ್ತಿತ ಪುರಸಭೆ) ಪ್ರಧಾನ ಹುದ್ದೆಗೆ ಕಾಂಗ್ರೆಸ್ (ಐ) ಪಕ್ಷದಿಂದ ಪಿ. ಬಿ. ವಿವೇಕ್ ಮತ್ತು ಮಹಮದ್ ಸಾದಿಕ್ ಈ ಇಬ್ಬರ ಹೆಸರುಗಳು ಕೇಳಿ ಬರುತ್ತಿವೆ.

ಸಾದಿಕ್ ಹಿಂದೆ ಪುರಸಭೆಗೆ ಅಧ್ಯಕ್ಷರಾಗಿದ್ದವರು. ಯಾವುದೇ ಅವ್ಯವಹಾರದಲ್ಲಿ ಹೆಸರು ಕೆಡಿಸಿಕೊಂಡವರಲ್ಲ. ತನ್ನ ಗೆಲುವಿನ ಅಂತರವೂ ಬಹಳ ಹೆಚ್ಚಿದೆ. ಅಲ್ಲದೆ ಜನಗಳ ಅಭಿಪ್ರಾಯವೂ ಹೆಚ್ಚಾಗಿ ತನ್ನ ಪರವಾಗಿದೆ ಎನ್ನುತ್ತಾರವರು. ಏನೇ ಆದರೂ ಪ್ರಧಾನ ಹುದ್ದೆಗಾಗಿ ಕಡೆತನಕ ಯತ್ನಿಸದೆ ಬಿಡುವವರಲ್ಲ

ಪಿ. ಬಿ. ವಿವೇಕ್ ಇದೇ ಮೊದಲ ಬಾರಿ ಆಯ್ಕೆಯಾದವರು. ಹಾಗಾಗಿ ಹೆಸರು, 'ಕೈ ಶುದ್ಧಿ' ಇತ್ಯಾದಿಗಳು ಇನ್ನೂ ಗೊತ್ತಾಗಲು ಸಾಧ್ಯವಿಲ್ಲ ಇವರಿಗೆ ಜನಸಂಪರ್ಕ ಸ್ವಲ್ಪ ದೂರವೇ ಎಂಬುದು ಸಾರ್ವತ್ರಿಕ ಅಭಿಪ್ರಾಯ. ಆದರೆ ಇವರು ತಾ|| ಕಾಂಗ್ರೆ ಅಧ್ಯಕ್ಷ ವಿಜಯ ಅಜಿಲರ ಆಯ್ಕೆ ಎಂಬ ಮಾತಿದೆ. ಈ ಅಂಶ ಬಹುಶಃ ಇವರಿಗೆ ಅತಿ ಹೆಚ್ಚಿನ ತೂಕ ನೀಡಬಹುದು.

ಸದ್ಯಕ್ಕೆ ಈ ಇಬ್ಬರಲ್ಲದೆ ಬೇರಾವ ಹೆಸರೂ ಕೇಳಿ ಬರುತ್ತಿಲ್ಲ. ಜನತಾ ದಳ ಈ ದಿಕ್ಕಿನಲ್ಲಿ ಯಾವುದೇ ಪ್ರಯತ್ನ ನಡೆಸುತ್ತಿರುವ ಲಕ್ಷಣಗಳಿಲ್ಲ

### ಶೃಂಗೇರಿ

ಇಲ್ಲಿನ ನೂತನ ಮಂಡಲ ಪಂಚಾಯ್ತಿಗೆ ಕಾಂಗ್ರೆಸ್‌ನ ಎಚ್. ಆರ್ ಕೃಷ್ಣಮೂರ್ತಿ ಪ್ರಧಾನರಾಗುವುದು ಬಹುತೇಕ ಖಚಿತವಾಗಿದೆ. ಬೇರೆ ಹೇಳಿ ಕೊಳ್ಳುವಂಥ ಹಳೆಯ ಅಥವಾ ಪ್ರಭಾವಿ ಸದಸ್ಯರಾರೂ ಇಲ್ಲ. ದಳ ಅಥವಾ ಬಿಜೆಪಿ ಪ್ರಧಾನ ಪಟ್ಟಕ್ಕೆ ಸ್ಪರ್ಧಿಸುವ ಸಾಧ್ಯತೆ ಇಲ್ಲ.

## ನ.ರಾ. ಪುರ : ಅಧ್ಯಕ್ಷ ಗಾದಿಗೆ ಕಾಂಗ್ರೆ ಮುಸುಕಿನ ಗುದ್ದಾಟ?

ನ ರಾ. ಪುರ : ಇಲ್ಲಿನ ಮಧ್ಯಾಂತರ ಮಂಡಲ ಪಂಚಾಯ್ತಿ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಬಹುಮತ ಗಳಿಸಿದೆಯಾದರೂ, ಅಧ್ಯಕ್ಷ (ಪ್ರಧಾನ) ಗಾದಿಯು ಇತ್ಯರ್ಥ ಪಕ್ಷದ ಮುಖಂಡರಿಗೆ ಸುಲಭದ ಕೆಲಸವಾಗಲಾರದು

ಮಂಡಲದ 15 ಸ್ಥಾನಗಳ ಪೈಕಿ ಕಾಂಗ್ರೆ 6 ಸ್ಥಾನಗಳನ್ನು ಗೆದ್ದಿದ್ದು, ಒಬ್ಬ ಪಕ್ಷೇತರರ ಬೆಂಬಲವೂ ಅದಕ್ಕಿದೆಯೆನ್ನಲಾಗಿದೆ. ಜನತಾ ದಳ ಮತ್ತು ಬಿಜೆಪಿ ಅಭ್ಯರ್ಥಿಗಳು ಹಾಗೂ ಈ ಪಕ್ಷಗಳ ಬೆಂಬಲಿತ ಪಕ್ಷೇತರರು ಸೇರಿ ಒಟ್ಟು 8 ಸ್ಥಾನಗಳು ದಳದ ಬೆಂಬಲಕ್ಕಿವೆಯೆನ್ನಲಾಗಿದೆ.

ಆದರೆ, 2 ನಾಮಕರಣ ಸದಸ್ಯರ ಬೆಂಬಲ ಸೇರಿದಾಗ ಕಾಂಗ್ರೆಗೇ ಬಹುಮತ ದೊರೆಯುವುದು ಖಚಿತವಿರುವುದರಿಂದ ಮುಂದಿನ ಪ್ರಧಾನರು ಕಾಂಗ್ರೆನವರೇ ಎಂಬುದು ಸಾಮಾನ್ಯ ಲೆಕ್ಕಾಚಾರ.

ಅವರಂತೆ, ಹಿಂದಿನ ಕೌನ್ಸಿಲ್‌ನಲ್ಲೂ ಸದಸ್ಯರಾಗಿದ್ದ ಹಾಗೂ ಊರಿನ ಹಿರಿಯ ತಲೆಮಾರಿನ ನಾಗರಿಕ ಮುಖಂಡ ಬಾಬಣ್ಣನವರ ಮಗನಾದ ಎಚ್.ಬಿ. ರಘುವೀರ್‌ಗೆ ಪ್ರಧಾನರ ಪಟ್ಟ ಕಟ್ಟಲು, ಕಾಂಗ್ರೆಯೊಳಗೆ ಕೆಲ ಸಿದ್ಧತೆಗಳೂ ನಡೆದಿವೆ

ತಾ|| ಕಾಂಗ್ರೆಯೊಳಗೆ ಬಹುತೇಕ ಮುಖಂಡರ ಮತ್ತು ಕಾರ್ಯಕರ್ತರ ಒಲವು ಇವರ ಪಾಲಿಗಿದೆ ಎನ್ನಲಾಗಿದೆ.

ಆದರೆ, ಮಾಜಿ ಪ್ರಧಾನ ಟಿ. ವಿ. ವರ್ಗೀಸ್ (ರಾಜು) ಅವರಿಗೆ ಪುನಃ ಪ್ರಧಾನರಾಗಬೇಕೆಂಬ ತೀವ್ರ ಒಲವಿದ್ದು, ಈ ಅಂಶ ಪ್ರಧಾನರ ಆಯ್ಕೆಯಲ್ಲಿ ಕಾಂಗ್ರೆಗೆ ದೊಡ್ಡ ತೊಡರಾಗಲಿದೆ ಎಂದು ಸುದ್ದಿಯಿದೆ. ರಾಜು ಮೊನ್ನಿನ ಚುನಾವಣೆಯಲ್ಲಿ ಸೋತಿದ್ದಾರಾದರೂ ಅವರ ಗುಂಪಿನವರೆಂದು ಗುರುತಿಸಲಾಗುವ ಐದು ಜನ ಗೆದ್ದಿದ್ದಾರೆ ಇವರಲ್ಲೊಬ್ಬರಿಗೆ—ಬಹುಮಾಡಿ ಎಚ್ ಜಿ ಭಾಸ್ಕರ್ ಅಥವಾ ಶಾರದಮ್ಮ ಅವರಿಗೆ— ಪ್ರಧಾನ ಪಟ್ಟ ನೀಡಬೇಕೆಂಬುದು ಈ ಗುಂಪಿನ ತಗಾದೆ ಎನ್ನಲಾಗುತ್ತಿದೆ

ಹೀಗೆ ತಮ್ಮ ಗುಂಪಿನವರೇ ಒಬ್ಬರು ರಾಮಾಯಣದ ಭರತನಂತೆ ಪ್ರಧಾನರಾದ ನಂತರ, ತಮ್ಮ ಸದಸ್ಯರಲ್ಲೇ ಒಬ್ಬರಿಂದ ರಾಜೀನಾಮೆ ಕೊಡಿಸಿ, ಆ ಸ್ಥಾನಕ್ಕೆ ರಾಜು ಸ್ಪರ್ಧಿಸಿ ಗೆದ್ದು ಬಂದು, ಪ್ರಧಾನ ಪಟ್ಟ ವಹಿಸಿಕೊಳ್ಳುವುದು—ಇದು ಈ ಗುಂಪು ಯೋಚಿಸಿರುವ ಕಾರ್ಯತಂತ್ರ ಎನ್ನಲಾಗುತ್ತಿದೆ

ಈ ಸುದ್ದಿಗಳಲ್ಲಿ ಹೆಚ್ಚಿನಂಶ ಕಾಂಗ್ರೆ ಒಳಗಿನದೇ ಆಗಿರುವುದೊಂದು ವಿಶೇಷ. ಆದರೆ ರಾಜು ಗುಂಪು ಎನ್ನಲಾಗುವ ಕಾರ್ಯಕರ್ತರು ಈ ಸುದ್ದಿಗಳನ್ನು ಅಲ್ಲಗಳೆಯುತ್ತಾ, ಪ್ರಧಾನರ ಆಯ್ಕೆ ಪಕ್ಷದ ಮುಖಂಡರ ತೀರ್ಮಾನಕ್ಕೆ ಬಿಟ್ಟಿದ್ದು ಎನ್ನುತ್ತಾರೆ.

ಈ ರೀತಿ ರಾಜೀನಾಮೆಗೆ 'ಆಯ್ಕೆ'ಯಾಗಿರುವವರೆಂದು 5 ನೇ ವಿಭಾಗದ ನಜೀರ್ ಮಹಮ್ಮದ್ ಹೆಸರು ಕೇಳಿ ಬರುತ್ತಿದೆ. ಆದರೆ ಅವರ ತಂದೆ "ಇದೆಲ್ಲ ಬರೀ ಕಟ್ಟು ಕತೆ" ಎಂದು ನಿರಾಕರಿಸುತ್ತಾರೆ.

ಇತ್ತ, ಜನತಾ ದಳಕ್ಕೆ ಪ್ರಧಾನರನ್ನು ಹೊಂದುವ ಸಾಧ್ಯತೆಗಳೇನೂ ಕಂಡು ಬರುತ್ತಿಲ್ಲವಾದರೂ, "ಅಸಾತ್ರ್" ಅಂಥ ಅವಕಾಶವೇನಾದರೂ ಸಿಕ್ಕಿಬಿಟ್ಟಲ್ಲಿ, ಅತ್ಯಂತ ಹಿರಿಯ ಹಾಗೂ ಗೌರವಾನ್ವಿತ ಸದಸ್ಯರಾದ ಲಕ್ಷ್ಮಣ ಶೆಟ್ಟಿ ಅವರು ಈ ಪಕ್ಷದ ಒಮ್ಮತದ ಆಯ್ಕೆಯಾಗಲಿದ್ದಾರೆ.

ಆದರೆ ಈ "ಅಕಸ್ಮಾತ್" ಹೇಗೆ ಸಂಭವಿಸಬಹುದು? ಕಾಂಗ್ರೆಯೊಳಗಿನ ಕಿತ್ತಾಟವೇನಾದರೂ ಬಗೆಹರಿಯದೆ ರಾಜು ಗುಂಪು ನೇರಾ ನೇರಾ ಸಗಟಾಗಿ ದಳದ ಅಭ್ಯರ್ಥಿಗೆ ಅಡ್ಡ ಮತ ಚಲಾಯಿಸುವವರೆಗೂ ಹೋಗಬಹುದೆ? ಇದು ಸಾಧ್ಯವಾಗಲಾರದು. ಇನ್ನೊಂದು ಸಾಧ್ಯತೆಯೆಂದರೆ ಕಾಂಗ್ರೆ ಬೆಂಬಲಿಗರೆನ್ನಲಾಗಿರುವ ಪಕ್ಷೇತರ ಸದಸ್ಯರು ದಳದ ಪರ ಒಲಿಯಬೇಕು. ಇದೂ ಬಹು ಕಷ್ಟದ ಲೆಕ್ಕಾಚಾರ.

ಅಂತೂ ಕಾದು ನೋಡಬೇಕಾಗಿದೆ.

### ಅಡಿಕೆ ಧಾರಣೆ

ಶಿವಮೊಗ್ಗ : 5-5-1990

ಸರಕು : 3900-4401

ಬೆಟ್ಟೆ : 2826-3189

ಗೊರಬಲು : 1840-2269

ಸಾಗರ : 5.5.1990

ಇಡಿ : 2936-3196

ಆಪಿ : 4169-4305

**ಮೆಣಸು**

ಸಾಗರ : 4480

ಶಿರಸಿ : 3299

### ಕಾಚ್ಕಲ್ ಸೇತುವೆ ಉದ್ಘಾಟನೆ

ಕೊಪ್ಪ: ಐದಾರು ವರ್ಷಗಳಿಂದ ನಿರ್ಮಾಣದಲ್ಲಿದ್ದ ಇಲ್ಲಿಗೆ ಸಮೀಪದ ಕಾಚಕಲ್ ರಸ್ತೆಯ ಸೇತುವೆಯನ್ನು ಏ 30ರಂದು ಜಿ. ಪ. ಅಧ್ಯಕ್ಷ ಬಿ ಎಲ್. ರಾಮದಾಸ್ ಉದ್ಘಾಟಿಸಿದರು. ಶಾಸಕ ಶಾಮಣ್ಣ ಅಧ್ಯಕ್ಷತೆ

### ಧ ನ್ಯ ವಾ ದ ಗ ಳು

ಕೊಪ್ಪ ಮಧ್ಯಾಂತರ ಮಂಡಲ ಪಂಚಾಯ್ತಿಗೆ 5ನೇ ವಿಭಾಗದ ಮಹಿಳಾ ಮೀಸಲು ಕ್ಷೇತ್ರದಿಂದ ಸ್ಪರ್ಧಿಸಿದ್ದ ನನಗೆ ಮತ ನೀಡಿ ಪ್ರೋತ್ಸಾಹಿಸಿದ ಎಲ್ಲಾ ಮತದಾರ ಬಾಂಧವರಿಗೂ, ಚುನಾವಣೆಯಲ್ಲಿ ನನ್ನ ಪರವಾಗಿ ಶ್ರಮಿಸಿದ ಎಲ್ಲಾ ಕಾರ್ಯಕರ್ತರು ಮತ್ತು ಅಭಿಮಾನಿಗಳಿಗೂ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

—ಜಾನಕಿ ನಾಗರಾಜ್,
ಕೊಪ್ಪ.

## ಹರಿಜನರಿಗೆ, ಮುಸ್ಲಿಮರಿಗೆ ಪ್ರಾತಿನಿಧ್ಯವಿಲ್ಲದ ಶೃಂಗೇರಿ ಮಂಡಲ ಪಂಚಾಯಿತಿ

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಇಲ್ಲಿನ ಜನ ಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿರುವ ಮುಸ್ಲಿಮರಿಗೂ, ಹರಿಜನರಿಗೂ ನೂತನ ಮಂಡಲ ಪಂಚಾಯ್ತಿಯಲ್ಲಿ ಪ್ರಾತಿನಿಧ್ಯ ದೊರೆತಿಲ್ಲ

ಅದರಲ್ಲೂ, ತಲತಲಾಂತರದಿಂದ ಎಂಬಂತೆ ಪುರಸಭೆಯಲ್ಲಿ ಕನಿಷ್ಠ ತಮ್ಮ ಒಬ್ಬ ಪ್ರತಿನಿಧಿಯನ್ನಾದರೂ ಹೊಂದಿರುತ್ತಿದ್ದ ಮುಸ್ಲಿಮರು ಈಗ ಇಕ್ಕಟ್ಟಿನಲ್ಲಿದ್ದಾರೆ.

ಹಿಂದೂಗಳ ಕೆಲವು 'ಧಾರ್ಮಿಕ' ಮೆರವಣಿಗೆಗಳನ್ನು ಮಸೀದಿಯ ಪ್ರದೇಶಕ್ಕೆ ಬಿಡಲು ಅಧಿಕಾರಿಗಳು ತಲ್ಲಣಿಸುವ ಹಾಗೂ ಮುಸ್ಲಿಮರ ಧಾರ್ಮಿಕ ಮೆರವಣಿಗೆಗಳು ಭಾರತೀ ಚೌಕದಿಂದ ಮೇಲಕ್ಕೆ ಬರಬಾರದೆಂದು ಪಟ್ಟು ಸಾಧಿಸುವ — ಧಾರ್ಮಿಕ ಸೌಹಾರ್ದವೆಂಬುದು ಇಷ್ಟು ತಳಮಟ್ಟ ಕಂಡಿರುವ ಈ ಊರಿನಲ್ಲಿ ಈ ರೀತಿ ಪ್ರಾತಿನಿಧ್ಯ ರಹಿತ ಸ್ಥಿತಿ ತುಸು ಗಂಭೀರವಾದುದೇ ಎನ್ನಬಹುದು.

5ನೇ ವಿಭಾಗದಿಂದ ಪರಿಶಿಷ್ಟ ಜಾತಿಯ ಮೀಸಲು ಸ್ಥಾನಕ್ಕೆ ಎಸ್. ನಾಗರಾಜು ಮತ್ತು ಹರಿಜನ ಬೆಳ್ಳಯ್ಯ ಸ್ಪರ್ಧಿಸಿದ್ದರು. ಮೊದಲ ಸಲ ಚುನಾವಣೆ ಘೋಷಣೆಯಾದಾಗ (ಫೆ 25) ಪರಿಶಿಷ್ಟ ಜಾತಿಯ ಪ್ರಮಾಣ ಪತ್ರ ಸಲ್ಲಿಸಿರಲಿಲ್ಲವೆಂದು ನಾಗರಾಜು ಅವರ ನಾಮಪತ್ರ ತಿರಸ್ಕೃತವಾಗಿತ್ತು ಹೀಗಾಗಿ, ಹರಿಜನರ ಮತ್ತು ಕೆಳವರ್ಗಗಳ ಬಗ್ಗೆ ಸ್ವಲ್ಪ ಧೈರ್ಯವಾಗಿ ಧ್ವನಿ ಎತ್ತುವ ಬೆಳ್ಳಯ್ಯನ ಆಯ್ಕೆ ಖಚಿತವಾಗಿತ್ತು.

ಆದರೆ, ಬೆಳ್ಳಯ್ಯನ ಆಯ್ಕೆ ಬಯಸದ ಕೆಲ ಆಸಕ್ತ ಹಿತಗಳು ಫೆ. 25ರ ಚುನಾವಣೆ ರದ್ದಾಗಿ ಏ. 29ರಂದು ಚುನಾವಣೆ ನಡೆಯುವ ನಡುವೆ ನಾಗರಾಜುವಿಗೆ ತಹಸೀಲ್ದಾರರಿಂದ ಜಾತಿ ಸರ್ಟಿಫಿಕೇಟ್ ಕೊಡಿಸಿ, ಅವರ ಅಭ್ಯರ್ಥಿತನವನ್ನು ಪುನರುಜ್ಜೀವನಗೊಳಿಸಿದರೆಂಬ ಪುಕಾರು ಎದ್ದಿದೆ. ಹರಿಜನೇತರರ ಎದುರು ಹರಿಜನರು ಅಲ್ಪ ಸಂಖ್ಯೆಯವರಾಗುವುದರಿಂದ ಬೆಳ್ಳಯ್ಯ ಗೆಲ್ಲಲಾಗದ್ದು ಸಹಜ.

ಅಂತೂ ಹರಿಜನರ ಪ್ರಾತಿನಿಧ್ಯಕ್ಕೆ ಕಲ್ಲು ಬಿದ್ದಂತಾಗಿದೆ.

**ಶೃಂಗೇರಿಯ** 3ನೇ ವಿಭಾಗದ ವಿಶೇಷತೆ

ಇಲ್ಲಿನ 3ನೇ ವಿಭಾಗದಿಂದ ಜನತಾ ದಳದ ಶೇಷಾದ್ರಿ ಭಟ್, ಬಿಜೆಪಿಯ ಸುಬ್ರಮಣ್ಯ ಭಟ್, ಕಾಂಗ್ರೆಸ್‌ನ ರಾಜಶೇಖರ್, ಪಕ್ಷೇತರ ಎಸ್. ಸಿ. ಪಾಂಡುರಂಗ ಮುಂತಾದ ಪ್ರಬಲ ಅಭ್ಯರ್ಥಿಗಳ ನಡುವೆ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಒಬ್ಬ ಸಾಮಾನ್ಯ ಎಲೆಕ್ಟ್ರಾನಿಕ್ಸ್ ತಂತ್ರಜ್ಞ ಟಿ. ಕೃಷ್ಣ, ಶೇಷಾದ್ರಿ ಭಟ್ ಕೈಲಿ ಕೇವಲ 2 ಮತಗಳ ಅಂತರದಲ್ಲಿ ಸೋತು ಕಂಡರೂ, ಈ ಎಲ್ಲ ಪ್ರಬಲರನ್ನೂ ಹಿಂದಿಕ್ಕಿ ಗೆಲುವಿನ ತೀರ ಸಮೀಪ ಬಂದಿದ್ದೇ ಒಂದು ವಿಶೇಷ.

# ರಾಜ್ಯ ಅರಣ್ಯದಲ್ಲಿ ಸಾಗುವಾನಿ ಕೊಯ್ದ ಆರೋಪಿಗಳ ಬಂಧನ

ನ. ರಾ. ಪುರ : ಇಲ್ಲಿಗೆ ಸಮೀಪದ ಅರಂಬಳ್ಳಿ ಸ್ಟೇಟ್ ಫಾರೆಸ್ಟ್‌ನಲ್ಲಿ ಭಾರೀ ಸಾಗುವಾನಿ ಮರವೊಂದನ್ನು ಕಡಿದು ಅರ್ಧ ಕೊಯ್ದು ಸಾಗಿಸಿದ್ದ ತಂಡದ ವಿವರನ್ನು ವಲಯ ಅರಣ್ಯಾಧಿಕಾರಿ ಸಿ. ಡಿ. ಜವರೇ ಗೌಡ ಮತ್ತು ಸಿಬ್ಬಂದಿ ಬಂಧಿಸಿ, 25 ಸಾವಿರ ರೂ. ಬೆಲೆಯ ಸುಮಾರು 60 ಘನ ಅಡಿ ನಾಟವನ್ನು ವಶಪಡಿಸಿಕೊಂಡಿದ್ದಾರೆ. ಫಾರೆಸ್ಟರ್ ಕೆ. ವಿ. ಹನುಮಂತಪ್ಪ, ಗಾರ್ಡ್ ವೆಂಕಟೇಶ್ ಮತ್ತು ಇತರರು ಕಾರ್ಯಾಚರಣೆಯಲ್ಲಿ ಭಾಗವಹಿಸಿದ್ದರು.

ಏ. 23 ರಂದು ಮರ ಕಡಿದಿದ್ದು, 26 ರಂದು ಚಾಕಚಕ್ಯತೆಯ ತನಿಖೆಯಿಂದ ಆರೋಪಿಗಳನ್ನು ಪತ್ತೆ ಹಚ್ಚಿ ಬಂಧಿಸಲಾಯಿತು. ಆದರೆ ಮುಖ್ಯ ಆರೋಪಿ ಶೆಟ್ಟಿಕೊಪ್ಪದ ಮಹೇಶ ಮತ್ತು ಇನ್ನಿಬ್ಬರು ನಿಕ್ಕವರ ಬಂಧನದ ಸುದ್ದಿ ತಿಳಿದು ತಲೆ ತಪ್ಪಿಸಿಕೊಂಡಿದ್ದಾರೆ.

ಆರೋಪಿಗಳನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲು ಸ್ಥಳೀಯ ನ್ಯಾಯಾಲಯಕ್ಕೆ ರಜೆಯಿದ್ದು, ಚಿಕ್ಕಮಗಳೂರಿನ ನ್ಯಾಯಾಧೀಶರೂ ರಜೆಯಿದ್ದುದರಿಂದ ತರೀಕೆರೆಗೆ ಕರೆದೊಯ್ಯಲಾಯಿತು. ಆದರೆ ಅಲ್ಲಿನ ನ್ಯಾಯಾಧೀಶರಿಗೆ ಚಿಕ್ಕಮಗಳೂರಿನ 'ಚಾರ್ಜ್' ಇಲ್ಲದ್ದರಿಂದ ಚಿಕ್ಕಮಗಳೂರಿಗೇ ಆರೋಪಿಗಳನ್ನೊಯ್ಯಲಾಯಿತು. ರಜೆಯ ಮೇಲಿದ್ದ ಅಲ್ಲಿನ ನ್ಯಾಯಾಧೀಶರ ಮಾತಿನ ಮೇಲೆ ಪುನಃ ಆರೋಪಿಗಳನ್ನು ತರೀಕೆರೆಗೇ ಒಯ್ದು, ನ್ಯಾಯಾಧೀಶರೆದುರು ಹಾಜರುಪಡಿಸಿ, ಶಿವಮೊಗ್ಗ ಜೈಲಿಗೆ ಒಯ್ದರೆ ಅಲ್ಲೂ ಕೆಲವು ಕಾನೂನಿನ ತೊಡಕುಗಳನ್ನೆದುರಿಸಬೇಕಾಯಿತೆಂದು ತಿಳಿದು ಬಂದಿದೆ.

ನ. ರಾ. ಪುರ ಮತ್ತು ಚಿಕ್ಕಗ್ರಹಾರ ವಲಯಗಳಲ್ಲಿ ಗಂಧ, ಸಾಗುವಾನಿ ಕಳವಿನ ಪ್ರಕರಣಗಳು ಎಡೆಬಿಡದೆ ನಡೆಯುತ್ತಿದ್ದು, ಅರಣ್ಯ ಸಿಬ್ಬಂದಿಗೆ ಹಗಲು-ರಾತ್ರಿ ಬಿಡುವೇ ಇಲ್ಲದಂತಾಗಿದೆ ಎಂದು ತಿಳಿದು ಬಂದಿದೆ.

## ಬಾಳೆಹೊನ್ನೂರು: ಮಹಿಳಾ ಮೀಸಲು ಸ್ಥಾನ ಕಾಂಗ್ರೆಸ್‌ಗೆ

ಬಾಳೆಹೊನ್ನೂರು : ಇಲ್ಲಿನ ಮಂಡಲ ಪಂಚಾಯ್ತಿಯ ಬಿ. ಕಣಬೂರು (ಬಾಳೆಹೊನ್ನೂರು) ಕ್ಷೇತ್ರದ ಉಪ ಚುನಾವಣೆಯಲ್ಲಿ ಕಾಂಗ್ರೆಸ್‌ನ ಬಿ. ಬಿ. ಉಮಾ 250 ಮತಗಳನ್ನು ಪಡೆದು ಆಯ್ಕೆಯಾಗಿದ್ದಾರೆ.

# ಬಿಳಾಲುಕೊಪ್ಪದಲ್ಲಿ ನೈಸರ್ಗಿಕ ಕೃಷಿ ಕುರಿತು ವಿಚಾರ ವಿನಿಮಯ

ಬಿಳಾಲುಕೊಪ್ಪ: ಇಲ್ಲಿನ ಕೃಷಿ ವಿಚಾರ, ವಿನಿಮಯ ಕೇಂದ್ರ, ಅಂಗನವಾಡಿ, ಅಂಗನವಾಡಿಯ ಸಲಹಾ ಸಮಿತಿ, ಪ್ರಗತಿ ಮಹಿಳಾ ಸಮಾಜ, ಯುವತಿ ಮಂಡಳಿ ಇವುಗಳ ವಾರ್ಷಿಕೋತ್ಸವವು ಸಿಂಡಿಕೇಟ್ ಬ್ಯಾಂಕ್ ಸಹಯೋಗದೊಡನೆ ಬಹು ವಿಜೃಂಭಣೆಯಿಂದ ನಡೆಯಿತು.

ರಾಮಚಂದ್ರಯ್ಯನವರ ಅಧ್ಯಕ್ಷತೆಯಲ್ಲಿ ಉದ್ಘಾಟನೆಗೊಂಡ ನೈಸರ್ಗಿಕ ಕೃಷಿ ವಿಚಾರ ಸಂಕಿರಣದಲ್ಲಿ ಬಾಳೆಹೊನ್ನೂರಿನ ಬಿ. ಎಸ್. ವಿಠಲರಾವ್ ಮತ್ತು ಕೊಪ್ಪದ ಶ್ರೀಕಾಂತ ಶೆಣೈ ಹಾಗೂ ಗುಡ್ಡೇತೋಟ ವಿಜಯ ರಾಘವ ಮಾತನಾಡಿದರು. ಮಧ್ಯಾಹ್ನದ ನಂತರ ಕೆಸರು ಗದ್ದೆ ಹಗ್ಗ ಜಗ್ಗಾಟ, ಮರವೇರುವಿಕೆ ಮುಂತಾದ ವಿವಿಧ ಸ್ಪರ್ಧೆಗಳು ನಡೆದವು.

ಸಂಜೆಯ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಸಿಂಡಿಕೇಟ್ ಬ್ಯಾಂಕ್ ವಿಭಾಗೀಯ ಅಧಿಕಾರಿ ನಾಯಕ್ ಮುಖ್ಯ ಅತಿಥಿಗಳಾಗಿದ್ದರು. ಶ್ರೀಮತಿ ಸುಲೋಚನ ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಿದವರಿಗೆ ಬಹುಮಾನ ವಿತರಿಸಿದರು. ಆಯಾ ಸಂಘಗಳ ವಾರ್ಷಿಕ ವರದಿಗಳನ್ನು ಕಾರ್ಯದರ್ಶಿಗಳು ಓದಿದರು. ಮಹಿಳಾ ಸಮಾಜದ ಅಧ್ಯಕ್ಷೆ ಕು|| ಮೀರಾ ಎಲ್ಲರನ್ನೂ ಸ್ವಾಗತಿಸಿ, ವೆಂಕಟೇಶ್ ವಂದಿಸಿದರು.

ಕೊನೆಯಲ್ಲಿ ಯೋಗಾಸನ ಪ್ರದರ್ಶನ ಮತ್ತು ವಿವಿಧ ಮನರಂಜನಾ ಕಾರ್ಯಕ್ರಮಗಳು ನಡೆದವು.

(ವರದಿ: ಕೆ.ವಿ. ಗಣೇಶ ಉಡುಪ)

## ಓದುಗರ ಪತ್ರಗಳು

# ಪಿ ಎಚ್ ಇ ಇಲಾಖೆ ಏಕೆ ಬೇಕು ?

ಪ್ರಿಯರೆ,

ಸುಮಾರು 5 ಸಾವಿರ ಜನ ಸಂಖ್ಯೆ ಹೊಂದಿರುವ ಹರಿಹರಪುರಕ್ಕೆ ಸುವ್ಯವಸ್ಥಿತವಾದ ಮಂಡಲ ಪಂಚಾಯ್ತಿಯಿದ್ದು, ಊರಿನ ಜನ ನಲ್ಲಿಯ ನೀರನ್ನೇ ಅವಲಂಬಿಸಿದ್ದಾರೆ. ಆದರೆ, ಪಕ್ಕದಲ್ಲಿ ತುಂಗಾ ನದಿಯೇ ಹರಿಯುತ್ತಿದ್ದರೂ, ಈ ಊರಿನ ನೀರಿನ ಬವಣೆ ಯಾವಾಗಲೂ ತಪ್ಪಿದ್ದೇ ಇಲ್ಲ. ಬೇಸಿಗೆಯಲ್ಲಂತೂ ಇದು ಅತಿ.

ತಾ|| 30.4.90 ರಿಂದ ಪಂಪ್ ಸೆಟ್ ಕೆಟ್ಟು, ಈ ದಿನದವರೆಗೂ (4.5.90) ಊರಲ್ಲಿ ನೀರು ಪೂರೈಕೆ ನಿಂತಿದೆ. ಇದರ ಜೊತೆ ಸಾರ್ವಜನಿಕ ಆರೋಗ್ಯ ಕಾಮಗಾರಿ (ಪಿ. ಎಚ್. ಇ.) ಇಲಾಖೆಯದಂತೆ. ಆದರೆ ಆ ಇಲಾಖೆಯನ್ನು ಪಂಚಾಯ್ತಿಯವರು ಸಂಪರ್ಕಿಸಿ 3-4 ದಿನಗಳಾದರೂ ಪ್ರತಿಕ್ರಿಯೆಯಿಲ್ಲವೆಂದರೆ ಏನರ್ಥ? ಇಂಥ ಇಲಾಖೆಗಳು ಇರಬೇಕಾದ್ದುದು ಸಾರ್ವಜನಿಕರಿಗಾಗಿ ಯಾವ ಹೊತ್ತಿನಲ್ಲಾದರೂ ಸೇವೆ ಸಲ್ಲಿಸಲಿಕ್ಕಾಗಿ. ಆದರಲ್ಲೂ, ತಿಂಗಳ ಪೂರ್ತಿ ಕೆಲಸವಿರದ ಈ ಇಲಾಖೆ ಹಗಲು ಮಾತ್ರವಲ್ಲದೆ, ರಾತ್ರಿಯಾದರೂ ಸಾರ್ವಜನಿಕ ಸೇವೆಗೆ ಅಣಿಯಾಗಬೇಕು. ಅದಿಲ್ಲವಾದರೆ ಈ ಇಲಾಖೆಯವರಿಗೆ ಸಂಬಳ, ವಾಹನ ಮುಂತಾದ್ದೆಲ್ಲ ಒದಗಿಸುವುದು ಯಾತಕ್ಕಾಗಿ?

ಬಿಡಿ ಭಾಗಗಳಿಲ್ಲ, ಮೆಕ್ಯಾನಿಕ್ ಇಲ್ಲ, ಹೊಸ ಪಂಪ್ ಕೊಳ್ಳಲು ಸರ್ಕಾರದಿಂದ ಹಣ ದೊರೆಯುತ್ತಿಲ್ಲ ಎಂಬುದಾಗಿ ಈ ಇಲಾಖೆಯಲ್ಲಿ ಯಾವಾಗಲೂ ಸಬೂಬುಗಳ ಮಾಮೂಲಿ ರಾಗವೇ ಇರುತ್ತದೆ. ಆದನ್ನೆಲ್ಲ ಸರ್ಕಾರ ಸಮರ್ಪಕವಾಗಿ ಒದಗಿಸುತ್ತಿಲ್ಲವಾದರೆ ಈ ಇಲಾಖೆ ಯಾರಿಗಾಗಿ ಇರಬೇಕು?

ಆದಕ್ಕಾಗಿ ಖರ್ಚು ಮಾಡುವ ಹಣವನ್ನು ನೇರವಾಗಿ ಮಂಡಲಗಳಿಗೆ ಅನುದಾನವಾಗಿ ಕೊಡಲಿ. ಆಗ ಮಂಡಲದವರು ತಾವೇ ಒಬ್ಬ ಸುಶಿಕ್ಷಿತ ತಂತ್ರಜ್ಞನನ್ನಿಟ್ಟುಕೊಂಡು ಸದಾ ಕಾಲ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದು.

ಸಂಬಂಧಪಟ್ಟವರು ಕೂಡಲೇ ಇತ್ತ ಗಮನ ಹರಿಸಬೇಕು.

—ಕೆ. ಎಸ್. ಅನಿಲ ಕುಮಾರ್,
ಹರಿಹರಪುರ.

## ರಾಜೀನಾಮೆ

ಮಾನ್ಯರೆ,

ಕೊಪ್ಪ ಟೌನ್ ಜನತಾ ದಳದ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೂ ಜನತಾ ದಳದ ಸದಸ್ಯತ್ವಕ್ಕೂ ರಾಜೀನಾಮೆ ನೀಡುತ್ತಿದ್ದೇನೆ. ಪಕ್ಷದ ಒಬ್ಬ ನಿಷ್ಠಾವಂತನಾಗಿ ಈ ವರೆಗೂ ಶ್ರಮಿಸಿರುವ ನಾನು ಈಗ ಟೌನ್ ಜನತಾ ದಳದಲ್ಲಿರುವ ಗುಂಪುಗಾರಿಕೆಯಿಂದ ಬೇಸತ್ತು ಈ ನಿರ್ಧಾರ ಕೈಗೊಂಡಿದ್ದೇನೆ.

—ಎ ಜಿ. ಗೋಪಾಲಗೌಡ,
ಕೊಪ್ಪ.

# ಕೃತಜ್ಞತೆಗಳು

ತಾ|| 29-4-90ರಂದು ನಡೆದ ಕೊಪ್ಪ ಮಧ್ಯಾಂತರ ಮಂಡಲ ಪಂಚಾಯ್ತಿ ಚುನಾವಣೆಯಲ್ಲಿ ಅತ್ಯಧಿಕ ಮತ ನೀಡಿ ನನ್ನನ್ನೂ ನನ್ನ ಸಹೋದ್ಯೋಗಿಗಳನ್ನೂ ಜಯಶೀಲರನ್ನಾಗಿ ಮಾಡಿದ ಮತ್ತು ಪ್ರೋತ್ಸಾಹಿಸಿದ ಕೊಪ್ಪದ ಎಲ್ಲಾ ಮತದಾರ ಬಾಂಧವರಿಗೂ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಅಧಿಕಾರಾವಧಿಯಲ್ಲಿ ನಡೆದ ಉತ್ತಮ ಕೆಲಸಗಳನ್ನು ಗುರುತಿಸಿ ಜನತೆ ಸಂಪೂರ್ಣ ಬೆಂಬಲ ಕೊಟ್ಟು, ಜನತಾ ದಳ ಮತ್ತು ಅದರ ಬೆಂಬಲಿತರಾದ 6 ಜನ ಅಭ್ಯರ್ಥಿಗಳನ್ನು ಗೆಲ್ಲಿಸಿದ್ದಾರೆ. ಅಲ್ಲದೆ ನಮ್ಮ ಪಕ್ಷದ ಇನ್ನೂ ಕೆಲವು ಸಹೋದ್ಯೋಗಿಗಳು ಕೆಲವೇ ಮತಗಳ ಅಂತರದಿಂದ ಜಯಶಾಲಿಗಳಾಗಲು ವಿಫಲರಾದರೂ ಸಹ ಅಧಿಕ ಹೆಚ್ಚು ಮತಗಳನ್ನು ಗಳಿಸಲು ಸಾಧ್ಯವಾಗಿದೆ.

ಜನರ ಈ ಅಪೂರ್ವ ಬೆಂಬಲವನ್ನು ಮನಸ್ಸಿನಲ್ಲಿಟ್ಟುಕೊಂಡು ಇನ್ನು ಮುಂದೆಯೂ ಸಹ ಊರಿನ ಹಿತಕ್ಕಾಗಿ ಹಾಗೂ ಎಲ್ಲಾ ಜನತೆಯ ಶ್ರೇಯೋಭಿವೃದ್ಧಿಗಾಗಿ ಶಕ್ತಿ ಮೀರಿ ಶ್ರಮಿಸುತ್ತೇನೆಂಬ ಆತ್ಮ ವಿಶ್ವಾಸ ನಮ್ಮದು.

ಮುಂದೆ ಕೂಡ ಜನತೆಯಿಂದ ಇನ್ನೂ ಹೆಚ್ಚಿನ ಬೆಂಬಲ, ಸಹಕಾರ ಅಪೇಕ್ಷಿಸುತ್ತೇನೆ.

—ಕೆ. ವಿ. ಮಂಜುನಾಥ ಶೆಟ್ಟಿ,
ಮಾಜಿ ಪ್ರಧಾನರು, ಮಧ್ಯಾಂತರ ಮಂಡಲ ಪಂಚಾಯ್ತಿ
ಕೊಪ್ಪ.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿ. ಎನ್. ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ